ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**
ನೂರ ನಲವತ್ತೆರಡನೆಯ ಅಧಿವೇಶನ
ಶುಕ್ರವಾರ, ದಿನಾಂಕ: 11ನೇ ಡಿಸೆಂಬರ್, 2020

ಅಂಗವಿಕಲರ ಮಾಸಿಕ ಪಿಂಚಣಿ ಪಡೆಯಲು ವರಮಾನ ನಿಗದಿಯನ್ನು ಪರಿಷ್ಕರಿಸುವ ಬಗ್ಗೆ

ಶ್ರೀ ಆರ್. ಪ್ರಸನ್ನ ಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

458(390) ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಪ್ರತಿ ವರ್ಷ ಡಿಸೆಂಬರ್ 3ರಂದು ಅಂಗವಿಕಲರ ದಿನಾಚರಣೆಯನ್ನು ರಾಜ್ಯ ಸರ್ಕಾರ ಆಚರಿಸುತ್ತಿರುವುದು ನಿಜವೇ;

(ಆ) ಹಾಗಿದ್ದಲ್ಲಿ, ಅಂಗವಿಕಲರಿಗಾಗಿ ಅನೇಕ ಸವಲತ್ತುಗಳನ್ನು ಪಡೆಯಲು ಸರ್ಕಾರದ ನೀತಿ ನಿಯಮಗಳು ಅಡ್ಡಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ತೆಗೆದುಕೊಂಡ ಕ್ರಮವೇನು; (ವಿವರ ನೀಡುವುದು)

(ಇ) ಅಂಗವಿಕಲರ ಮಾಸಿಕ ಪಿಂಚಣಿ ಪಡೆಯಲು ಪೋಷಕರ ವಾರ್ಷಿಕ ವರಮಾನ ರೂ.11.500ಕ್ಕೆ ನಿಗದಿ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಸರ್ಕಾರ ಅಂಗವಿಕಲರ ನೆರವಿಗೆ ಯಾವ ರೀತಿ ಕಾರ್ಯಕ್ರಮ ರೂಪಿಸಿದೆ; (ವಿವರ ನೀಡುವುದು)

(ಈ) ಬಂದಿದ್ದಲ್ಲಿ, ವರಮಾನ ನಿಗದಿಯನ್ನು ಕಾಲಕಾಲಕ್ಕೆ ಪರಿಷ್ಕರಣೆ ಮಾಡದಿರುವುದರಿಂದ ಅಂಗವಿಕಲರಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಅಂಗವಿಕಲರ ನೆರವಿಗೆ ರೂಪಿಸಿದ ಸರ್ಕಾರದ ಕಾರ್ಯಕ್ರಮಗಳಾವುವು?